# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1118
ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್
ಉತ್ತರಿಸುವ ದಿನಾಂಕ : 20.12.2018
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಒಟ್ಟು ವೃದ್ಧಾಶ್ರಮಗಳ ಸಂಖ್ಯೆ ಎಷ್ಟು; ವೃದ್ಧಾಶ್ರಮಗಳಲ್ಲಿರುವ ಹಿರಿಯ ನಾಗರೀಕರ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಅನುದಾನದಡಿ 28 ವೃದ್ಧಾಶ್ರಮಗಳು, ಕೇಂದ್ರ ಸರ್ಕಾರದ ಅನುದಾನದಡಿ 42 ವೃದ್ಧಾಶ್ರಮಗಳು ಇದ್ದು, ಈ ರೀತಿ ಸರ್ಕಾರದ ಅನುದಾನದಡಿಯಲ್ಲಿ ಒಟ್ಟಾರೆ 70 ವೃದ್ಧಾಶ್ರಮಗಳು ಇರುತ್ತವೆ.<br>ಈ ಎರಡು ಯೋಜನೆಯಡಿಯಲ್ಲಿ ಒಟ್ಟಾರೆ 1975 ವೃದ್ಧ ಫಲಾನುಭವಿಗಳು ಇರುತ್ತಾರೆ.<br>ಜಿಲ್ಲಾ ಮಟ್ಟದಲ್ಲಿ ರಾಜ್ಯ ಅನುದಾನ ಹಾಗೂ ಕೇಂದ್ರ ಅನುದಾನದಡಿಯಲ್ಲಿ ಇರುವ ವೃದ್ಧಾಶ್ರಮಗಳ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| ಆ) | ರಾಜ್ಯದಲ್ಲಿರುವ ಒಟ್ಟು ಅನಾಥಾಲಯಗಳ ಮತ್ತು ಅಲ್ಲಿ ಇರುವ ಸಂಖ್ಯೆ ಎಷ್ಟು ಗಂಡು ಮಕ್ಕಳ ಮತ್ತು ಹೆಣ್ಣು ಮಕ್ಕಳ ಸಂಖ್ಯೆ ಎಷ್ಟು; 18 ವರ್ಷ ಮೀರಿದ ಅನಾಥರ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಸಮಗ್ರ ಮಕ್ಕಳ ರಕ್ಷಣಾ ಯೋಜನೆಯಡಿ ಬಾಲ ನ್ಯಾಯ ಕಾಯ್ದೆ (ಮಕ್ಕಳ ರಕ್ಷಣೆ ಮತ್ತು ಪೋಷಣೆ) 2015 ರನ್ವಯ ಅನಾಥ ಮಕ್ಕಳು ಸೇರಿದಂತೆ ರಕ್ಷಣೆ ಮತ್ತು ಪೋಷಣೆಯ ಅಗತ್ಯವಿರುವ ಮಕ್ಕಳಿಗಾಗಿ ಒಟ್ಟು 1134 ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ.<br>1. ಸರ್ಕಾರದಿಂದ : ಬಾಲಮಂದಿರಗಳು – 59<br>2. ಸರ್ಕಾರೇತರ :<br>a. ಅರ್ಹ ಸಂಸ್ಥೆಗಳು – 8<br>b. ತೆರೆದ ತಂಗುದಾಣಗಳು – 39<br>c. ನೋಂದಾಯಿತ ಇತರೆ ಪಾಲನಾ ಸಂಸ್ಥೆಗಳು – 1028<br>**ಒಟ್ಟು ಸಂಸ್ಥೆಗಳು – 1134**<br>ಈ ಸಂಸ್ಥೆಗಳಲ್ಲಿರುವ ಒಟ್ಟು ಮಕ್ಕಳು ಮತ್ತು ಅದರಲ್ಲಿರುವ ಅನಾಥ ಮಕ್ಕಳ ಜಿಲ್ಲಾವಾರು ವಿವರವನ್ನು ಅನುಬಂಧ-2ರಲ್ಲಿ ಒದಗಿಸಿದೆ.<br>ನಿರ್ಗತಿಕ ಮಕ್ಕಳ ಕುಟೀರ ಯೋಜನೆಗೆ ಸಂಬಂಧಿಸಿದ ಮಾಹಿತಿಯನ್ನು ಅನುಬಂಧ-3ರಲ್ಲಿ ಒದಗಿಸಿದೆ. |

| | | |
|---|---|---|
| ಇ) | ವೃದ್ಧಾಶ್ರಮ ಮತ್ತು ಅನಾಥಾಶ್ರಮಗಳನ್ನು ಸಂಯೋಜಿಸುವ ಮೂಲಕ ಅನಾಥಾಶ್ರಮದ ಕಿರಿಯ ಮಕ್ಕಳಿಗೆ ಹಿರಿಯ ಪ್ರೀತಿ ಒಲವು ಅನುಭವ ಹಾಗೂ ವೃದ್ಧಾಶ್ರಮದ ಹಿರಿಯವರಿಗೆ ಸಣ್ಣ ಮಕ್ಕಳೊಂದಿಗೆ ಆಟ ಮತ್ತು ಸಣ್ಣ ಮಕ್ಕಳ ನಿಷ್ಕಲ್ಮಶ ಪ್ರೀತಿಯೊಂದಿಗೆ ಸಮಯ ಕಳೆಯುವ ಅವಕಾಶ ಕಲ್ಪಿಸುವ ನಿಟ್ಟಿನಲ್ಲಿ ಹೊಸ ರೂಪದ ಹಿರಿಯ ಮತ್ತು ಕಿರಿಯರ ಸಂಯೋಜಿತ ಆಶ್ರಯ ವ್ಯವಸ್ಥೆಯನ್ನು ಮನೆಯ ರೂಪದಲ್ಲಿ ನಿರ್ಮಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ: ಇದರ ಅವಶ್ಯಕತೆ ಕುರಿತು ಸರ್ಕಾರದ ನಿಲುವೇನು? | ವೃದ್ಧಾಶ್ರಮ ಮತ್ತು ಅನಾಥಾಶ್ರಮಗಳನ್ನು ಸಂಯೋಜಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

**ಸಂಖ್ಯೆ: ಮಮಇ 254 ಪಿಹೆಚ್‌ಪಿ 2018**

(ಡಾ|| ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ,
ಹಿರಿಯ ನಾಗರೀಕರ ಸಬಲೀಕರಣ ಹಾಗೂ
ಕನ್ನಡ ಮತ್ತು ಸಂಸ್ಕೃತಿ ಸಚಿವರು